# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 411+197

ಸದಸ್ಯರುಗಳ ಹೆಸರು : ಶ್ರೀ ಆರ್. ಪ್ರಸನ್ನ ಕುಮಾರ್
ಶ್ರೀ ಎನ್. ರವಿಕುಮಾರ್

ಉತ್ತರಿಸಬೇಕಾದ ಸಚಿವರು : ಸಾರಿಗೆ ಸಚಿವರು

ಉತ್ತರಿಸಬೇಕಾದ ದಿನಾಂಕ : 18-07-2019

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಎಷ್ಟು ಜಿಲ್ಲೆಗಳಲ್ಲಿ ಖಾಸಗಿ ಬಸ್‌ಗಳು ಸಂಚರಿಸುತ್ತಿವೆ; (ಆ ಸಂಸ್ಥೆಗಳ ಹೆಸರು ಹಾಗೂ ಮಾಲೀಕರ ಹೆಸರು ಸಹಿತ ವಿವರ ನೀಡುವುದು) ಅವರಿಗೆ ಮಂಜೂರಾದ ಮಾರ್ಗಗಳು ಯಾವುವು; (ವಿವರ ನೀಡುವುದು) | ರಾಜ್ಯದಲ್ಲಿ ಪ್ರಯಾಣಿಕರ ಅನುಕೂಲಕ್ಕಾಗಿ ಖಾಸಗಿಯವರಿಗೆ ವಿವಿಧ ಮಾರ್ಗಗಳಲ್ಲಿ ಕಾರ್ಯಾಚರಣೆಗೊಳಿಸಲು ಒಟ್ಟು 6133 ಪರವಾನಗಿಗಳನ್ನು ನೀಡಲಾಗಿರುತ್ತದೆ.<br>ಪ್ರಾದೇಶಿಕ ಸಾರಿಗೆ ಪ್ರಾಧಿಕಾರ ಮಂಗಳೂರು ರವರಿಂದ 378 ಸಿಟಿ ಸರ್ವಿಸ್ ರಹದಾರಿಗಳನ್ನು ಖಾಸಗಿಯವರಿಗೆ ನೀಡಲಾಗಿದೆ.<br>***(ವಿವರಗಳು ಅಧಿಕ ಪ್ರಮಾಣದಲ್ಲಿರುವುದರಿಂದ ಮಾನ್ಯ ಸದಸ್ಯರಿಗೆ ಪ್ರತ್ಯೇಕವಾಗಿ ಒದಗಿಸಲಾಗುವುದು)** |
| ಆ | ಖಾಸಗಿ ಸಾರಿಗೆ ಸಂಸ್ಥೆಯವರು ಹಬ್ಬದ ದಿನಗಳಂದು ಮತ್ತು ಸರ್ಕಾರಿ ರಜೆ ದಿನಗಳಂದು ಸಂಚರಿಸುವ ಬಸ್ಸುಗಳ ಟಿಕೇಟ್ ದರಗಳನ್ನು ವಿಪರೀತವಾಗಿ ಹೆಚ್ಚಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಈ ಕುರಿತು ಸರ್ಕಾರ ಯಾವ ಕ್ರಮಕೈಗೊಂಡಿದೆ; | ಸರ್ಕಾರದ ಅಧಿಸೂಚನೆ ಸಂಖ್ಯೆ ಸಾರಿಇ 97 ಸಾಇಪ 2013 ದಿನಾಂಕ 31-7-2013ರ ಪ್ರಕಾರ ಮಜಲು ವಾಹನಗಳಿಗೆ ಏಕ ರೂಪದ ಪ್ರಯಾಣ ದರವನ್ನು ನಿಗದಿಪಡಿಸಿರುತ್ತದೆ. ಸದರಿ ಅಧಿಸೂಚನೆ ಪ್ರಕಾರ ಹಬ್ಬ, ಹರಿದಿನಗಳು ಮತ್ತು ಜಾತ್ರೆ ಸಮಯದಲ್ಲಿ ಹೆಚ್ಚುವರಿ ಪ್ರಯಾಣ ದರ ವಿಧಿಸಲು ಅವಕಾಶವಿರುತ್ತದೆ.<br>ಸರ್ಕಾರವು ನಿಗದಿಪಡಿಸಿದ ದರಕ್ಕಿಂತ ಹೆಚ್ಚಿನ ದರವನ್ನು ಪ್ರಯಾಣಿಕರಿಂದ ವಸೂಲು ಮಾಡಬಾರದೆಂದು ಖಾಸಗಿ ಪ್ರವರ್ತಕರಿಗೆ ಮತ್ತು ಸಾರಿಗೆ ಸಂಸ್ಥೆಗಳಿಗೆ ಕಟ್ಟುನಿಟ್ಟಿನ ಸೂಚನೆ ನೀಡಲಾಗಿದೆ. ಒಂದು ವೇಳೆ ವಸೂಲು ಮಾಡುತ್ತಿರುವುದು ಕಂಡು ಬಂದಲ್ಲಿ, ರಹದಾರಿಗಳ ಮೇಲೆ ಕಾನೂನು ರೀತ್ಯ ಕ್ರಮ ಕೈಗೊಳ್ಳಲಾಗುವುದು. |
| ಇ | ಅನುಮತಿ ಕೊಡುವಾಗ ವಿಧಿಸಿದಂತಹ ನಿಯಮಗಳೇನು; ನಿಯಮಗಳನ್ನು ಸದರಿ ಸಂಸ್ಥೆಗಳು ಪಾಲಿಸುತ್ತಿವೆಯೇ; ಪಾಲಿಸದಿದ್ದ ಎಷ್ಟು ಸಂಸ್ಥೆಗಳ ಮೇಲೆ ಕ್ರಮ ಕೈಗೊಳ್ಳಲಾಗಿದೆ. | 1) ಕಾಂಟ್ರಾಕ್ಟ್ ಕ್ಯಾರೇಜ್ ರಹದಾರಿಗಳನ್ನು ಕರ್ನಾಟಕ ರಾಜ್ಯದಲ್ಲಿ ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಕರಾರು ಒಪ್ಪಂದದ ಆಧಾರದ ಮೇಲೆ ಪ್ರಯಾಣಿಕರನ್ನು ಕರೆದೊಯ್ಯಲು ರಹದಾರಿಯನ್ನು ನೀಡಲಾಗಿರುತ್ತದೆ.<br>2) ಅಖಿಲ ಭಾರತ ಪ್ರವಾಸಿ ರಹದಾರಿಗಳನ್ನು ಪಡೆದ ವಾಹನಗಳು ಕರ್ನಾಟಕ ರಾಜ್ಯದಿಂದ ಇತರೆ ರಾಜ್ಯಗಳ ಪ್ರೇಕ್ಷಣೀಯ ಸ್ಥಳಗಳಿಗೆ ಒಪ್ಪಂದದ ಆಧಾರದ ಮೇಲೆ ಸಾಮೂಹಿಕವಾಗಿ ಪ್ರವಾಸಿಗರನ್ನು ಕೊಂಡೊಯ್ಯಲು ರಹದಾರಿಯನ್ನು ನೀಡಲಾಗಿರುತ್ತದೆ.<br>ರಹದಾರಿ ನಿಬಂಧನೆಗಳನ್ನು ಉಲ್ಲಂಘಿಸಿ ಪ್ರಯಾಣಿಕರನ್ನು ಸಾಗಿಸುವಂತಹ ವಾಹನಗಳನ್ನು ಆಗಿಂದಾಗ್ಗೆ ತನಿಖೆಗೆ ಒಳಪಡಿಸಿ ನಿಯಮಾನುಸಾರ ಕ್ರಮ ತೆಗೆದುಕೊಳ್ಳಲಾಗುತ್ತಿದೆ. |

| | | |
|---|---|---|
| ಈ | ಹಬ್ಬ-ಹರಿದಿನಗಳಲ್ಲಿ ಮತ್ತು ಸರ್ಕಾರಿ ರಜೆ ದಿನಗಳಲ್ಲಿ 5 ರಿಂದ 10 ಪಟ್ಟು ದರವನ್ನು ಹೆಚ್ಚು ಮಾಡಿ ಜನರಿಗೆ ಅರ್ಥಿಕ ತೊಂದರೆ ಹಾಗೂ ಹಿಂಸೆ ಕೊಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಸರ್ಕಾರ ಏನು ಕ್ರಮ ಕೈಗೊಂಡಿದೆ; ಈ ರೀತಿ ಟಿಕೇಟು ದರ ಏರಿಸಿರುವ ಎಷ್ಟು ಬಸ್ಸುಗಳ ಪರವಾನಗಿಯನ್ನು ರದ್ದುಗೊಳಿಸಲಾಗಿದೆ; | ಮೋಟಾರು ವಾಹನ ಕಾಯ್ದೆ 1988ರ ಕಲಂ 67(1) (i)ರಲ್ಲಿ ಮಜಲು ವಾಹನ ಒಪ್ಪಂದ ವಾಹನ ಮತ್ತು ಸರಕು ಸಾಗಣೆ ವಾಹನಗಳಿಗೆ ಕನಿಷ್ಠ / ಗರಿಷ್ಠ ಪ್ರಯಾಣ ದರ ನಿಗದಿ ಮಾಡಲು ರಾಜ್ಯ ಸರ್ಕಾರವು ರಾಜ್ಯ ಸಾರಿಗೆ ಪ್ರಾಧಿಕಾರ ಮತ್ತು ಪ್ರಾದೇಶಿಕ ಸಾರಿಗೆ ಪ್ರಾಧಿಕಾರಗಳಿಗೆ ಕಾಲಕಾಲಕ್ಕೆ ಅಧಿಸೂಚನೆ ಹೊರಡಿಸುವ ಮೂಲಕ ನಿರ್ದೇಶನ ನೀಡುವ ಮೇರೆಗೆ ಪ್ರಯಾಣ ದರ ನಿಗದಿಪಡಿಸಲು ಅವಕಾಶವಿರುತ್ತದೆ. ಮಜಲು ವಾಹನಗಳಿಗೆ ಸಂಬಂಧಪಟ್ಟಂತೆ ಸರ್ಕಾರವು ಹೊರಡಿಸಿರುವ ಅಧಿಸೂಚನೆ ಸಂಖ್ಯೆ ಸಾರಿಇ 97 ಸಾಇಪ 2013 ದಿನಾಂಕ 31-07-2013ರಲ್ಲಿ ನಿಗದಿ ಪಡಿಸಿರುವಂತೆ ಹಬ್ಬ-ಹರಿದಿನಗಳು, ಜಾತ್ರೆಗಳು ಇತರ ಸಂದರ್ಭಗಳಲ್ಲಿ ನಿಗದಿತ ದರಕ್ಕಿಂತ ಹೆಚ್ಚುವರಿಯಾಗಿ ದರ ವಿಧಿಸಲು ಅವಕಾಶ ಕಲ್ಪಿಸಿರುತ್ತದೆ.<br><br>ರಹದಾರಿ ನಿಯಮಗಳನ್ನು ಉಲ್ಲಂಘಿಸಿ ಸಂಚರಿಸುತ್ತಿರುವ ವಾಹನಗಳನ್ನು ಕಾಲಕಾಲಕ್ಕೆ ತನಿಖೆಗೆ ಒಳಪಡಿಸುವ ಪ್ರವರ್ತನ ಕಾರ್ಯವು ನಿರಂತರವಾಗಿ ಜಾರಿಯಲ್ಲಿದೆ. ಒಪ್ಪಂದ ವಾಹನ ಮತ್ತು ಅಖಿಲ ಭಾರತ ಪ್ರವಾಸಿ ವಾಹನಗಳ ತಪಾಸಣೆ ಮಾಡಿ ತನಿಖಾ ವರದಿಗಳನ್ನು ನೀಡಿರುವ ವಾಹನಗಳ ರಹದಾರಿಗಳ ಮೇಲೆ ಇಲಾಖೆಯಿಂದ ಕಾನೂನಿನ ರೀತ್ಯ ರಹದಾರಿಗಳನ್ನು ಅಮಾನತ್ತುಗೊಳಿಸುವ, ರಾಜೀದಂಡ ವಿಧಿಸುವಂತಹ ಕ್ರಮವನ್ನು ಕಾಲಕಾಲಕ್ಕೆ ತೆಗೆದು ಕೊಳ್ಳಲಾಗುತ್ತಿದೆ.<br><br>2013ನೇ ಸಾಲಿನಿಂದ ಇದುವರೆಗೂ ವಾಹನಗಳನ್ನು ತಪಾಸಣೆ ಮಾಡಿ ರಹದಾರಿ ನಿಯಮ ಉಲ್ಲಂಘನೆ ಮಾಡಿ ಸಂಚರಿಸುತ್ತಿರುವ 4392 ಒಪ್ಪಂದ ವಾಹನಗಳ ಮೇಲೆ ಇಲಾಖಾ ಕ್ರಮ ಜರುಗಿಸಿ ಒಟ್ಟು ರೂ.1,15,09,680/-ಗಳನ್ನು ಹಾಗೂ 2414 ಅಖಿಲ ಭಾರತ ಪ್ರವಾಸಿ ವಾಹನಗಳ ಮೇಲೆ ಕ್ರಮ ಜರುಗಿಸಿ ರೂ.41,07,875/-ಗಳನ್ನು ದಂಡದ ರೂಪದಲ್ಲಿ ವಸೂಲಿಸಲಾಗಿರುತ್ತದೆ. 602 ಪ್ರಕರಣ ಗಳಲ್ಲಿ ರಹದಾರಿಗಳನ್ನು ಅಮಾನತ್ತುಗೊಳಿಸಲಾಗಿದೆ,<br><br>ನಿರ್ದಿಷ್ಟವಾಗಿ ಟಿಕೆಟ್ ದರ ಏರಿಸಿದ ಅಪರಾಧಕ್ಕೆ ಸಂಬಂಧಿಸಿದಂತೆ ರಹದಾರಿ ರದ್ದುಪಡಿಸಿರುವುದಿಲ್ಲ. ಆದರೆ ಇನ್ನಿತರೆ ರಹದಾರಿ ನಿಯಮ ಉಲ್ಲಂಘಿಸಿದ ಪ್ರಕರಣಗಳಿಗೆ ಸಂಬಂಧಿಸಿದಂತೆ 59 ರಹದಾರಿ ಗಳನ್ನು ರದ್ದುಗೊಳಿಸಲಾಗಿದೆ. ಹಾಗೂ ತನಿಖಾ ಕಾರ್ಯವು ನಿರಂತರವಾಗಿ ಚಾಲ್ತಿಯಲ್ಲಿರುತ್ತದೆ. |

| | | |
|---|---|---|
| ಉ | ಇದೇ ಪದ್ಧತಿಯನ್ನು ರಾಜ್ಯ ರಸ್ತೆ ಸಾರಿಗೆ ಸಂಸ್ಥೆ ಅನುಸರಿಸುತ್ತಿರುವುದು ನಿಜವೇ; ನಿಜವಿದ್ದಲ್ಲಿ ಕಾರಣಗಳೇನು? | ರಾಜ್ಯ ಸಾರಿಗೆ ಸಂಸ್ಥೆಗಳು ಮಧ್ಯಮ ಮತ್ತು ಕೆಳವರ್ಗದ ಪ್ರಯಾಣಿಕರು ಹೆಚ್ಚಿನ ಸಂಖ್ಯೆಯಲ್ಲಿ ಪ್ರಯಾಣಿಸುವ ವೇಗದೂತ ಮತ್ತು ಸಾಮಾನ್ಯ ದರ್ಜೆಯ ಸಾರಿಗೆಗಳಲ್ಲಿ ಹಬ್ಬ ಹರಿದಿನಗಳಲ್ಲಿ ಮತ್ತು ಸರ್ಕಾರಿ ರಜೆ ದಿನಗಳಲ್ಲಿ ಹೆಚ್ಚಿನ ಪ್ರಯಾಣ ದರ ವಿಧಿಸುತ್ತಿರುವುದಿಲ್ಲ.<br><br>ಆದರೆ, ಪ್ರತಿಷ್ಠಿತ ಸಾರಿಗೆಗಳಲ್ಲಿ ಮಾತ್ರ ವಾರಾಂತ್ಯ ದಿನಗಳಂದು ಶೇ.10 ರಷ್ಟು ಮತ್ತು ಹಬ್ಬ, ಜಾತ್ರೆ ದಿನಗಳಲ್ಲಿ ಕಾರ್ಯಾಚರಣೆ ಮಾಡುವ ವಿಶೇಷ/ಹೆಚ್ಚುವರಿ ಸಾರಿಗೆಗಳಲ್ಲಿ ಮಾತ್ರ ಶೇ.20 ರಷ್ಟು ಹೆಚ್ಚುವರಿ ಪ್ರಯಾಣ ದರವನ್ನು ವಿಧಿಸಲಾಗುತ್ತಿದೆ.<br><br>ಈ ರೀತಿ ಕಾರ್ಯಾಚರಿಸುವ ವಿಶೇಷ/ಹೆಚ್ಚುವರಿ ಸಾರಿಗೆಗಳಲ್ಲಿ ಏಕಮುಖ (One way) ಸಂಚಾರ ಒತ್ತಡವಿರುವುದರಿಂದ, ವಿರುದ್ಧ ದಿಕ್ಕಿನಿಂದ ವಾಹನಗಳನ್ನು ವಿರಳ ಪ್ರಯಾಣಿಕರಿಂದಾಗಿ ಖಾಲಿಯಾಗಿ ಆಚರಣೆ ಮಾಡಬೇಕಾಗುತ್ತದೆ, ಇದರಿಂದಾಗಿ ನಿಗಮಕ್ಕೆ ನಷ್ಟವಾಗುತ್ತದೆ. ಆದುದರಿಂದ ಸಾರ್ವಜನಿಕ ಪ್ರಯಾಣಿಕರ ಹಿತಾಸಕ್ತಿಯನ್ನು ಗಮನದಲ್ಲಿರಿಸಿಕೊಂಡು ಅವರಿಗೆ ಹೆಚ್ಚಿನ ಹೊರೆಯಾಗದಂತೆ ವಿಶೇಷ/ಹೆಚ್ಚುವರಿ ಸಾರಿಗೆಗಳಲ್ಲಿ ಮಾತ್ರ ಶೇ.20 ರಷ್ಟು ಹೆಚ್ಚುವರಿ ಪ್ರಯಾಣದರವನ್ನು ವಿಧಿಸಲಾಗುತ್ತಿದೆ. |
| ಊ | ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಎಷ್ಟು ಸರ್ಕಾರಿ ಬಸ್ಸುಗಳನ್ನು ಲೋಕಲ್ ಸಾರಿಗೆ ಬಸ್ಸುಗಳನ್ನಾಗಿ ಬಳಸಲಾಗುತ್ತಿದೆ? (ಜಿಲ್ಲಾವಾರು ಮಾಹಿತಿ ನೀಡುವುದು) | ಕ.ರಾ.ರ.ಸಾ ನಿಗಮ, ವಾ.ಕ.ರ.ಸಾ ಸಂಸ್ಥೆ ಮತ್ತು ಈ.ಕ.ರ.ಸಾ ಸಂಸ್ಥೆಗಳು ಕಾರ್ಯಾಚರಿಸುತ್ತಿರುವ ಸಾಮಾನ್ಯ/ನಗರ/ಸಬ್ ಅರ್ಬನ್ ಸಾರಿಗೆಗಳ ಜಿಲ್ಲಾವಾರು ವಿವರಗಳನ್ನು ಅನುಬಂಧದಲ್ಲಿ ನೀಡಲಾಗಿದೆ. |

ಸಂಖ್ಯೆ: ಟಿಡಿ 39 ಟಿಸಿಕ್ಯೂ 2019

(ಡಿ.ಸಿ.ತಮ್ಮಣ್ಣ)
ಸಾರಿಗೆ ಸಚಿವರು